**ಕರ್ನಾಟಕ ವಿಧಾನ ಪರಿಷತ್ತು**

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 184
2. ಸದಸ್ಯರ ಹೆಸರು : ಶ್ರೀ ಪಿ.ಆರ್.ರಮೇಶ್
3. ಉತ್ತರಿಸಬೇಕಾದ ದಿನಾಂಕ : 08.12.2020
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ರೈತರು ಬೆಳೆದ ತೋಟಗಾರಿಕಾ ಬೆಳೆಗಳನ್ನು ಸಮರ್ಪಕವಾಗಿ ಮಾರಾಟ ಮಾಡಲು ಯಾವ ವ್ಯವಸ್ಥೆಗಳು ಅಸ್ತಿತ್ವದಲ್ಲಿವೆ;(ವಿವರ ನೀಡುವುದು) | ಕೃಷಿ ಮಾರಾಟ ಇಲಾಖೆಯು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ನ್ನು ಜಾರಿಗೊಳಿಸುತ್ತಿದೆ. ಇದರಡಿಯಲ್ಲಿ 162 ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳನ್ನು ರಾಜ್ಯದಲ್ಲಿ ಸ್ಥಾಪಿಸಲಾಗಿದೆ. ಇದರ ಜೊತೆಗೆ 352 ಉಪ ಮಾರುಕಟ್ಟೆಗಳಿವೆ. ಅಧಿಸೂಚಿತ ಕೃಷಿ ಉತ್ಪನ್ನಗಳ ಸಗಟು ವಹಿವಾಟನ್ನು ನಿಯಂತ್ರಣ ಮತ್ತು ಮೇಲ್ವಿಚಾರಣೆ ನಡಸುವ ಜವಾಬ್ದಾರಿಯನ್ನು ಮಾರುಕಟ್ಟೆ ಸಮಿತಿಗಳು ಹೊಂದಿರುತ್ತವೆ.<br><br>ರಾಜ್ಯದಲ್ಲಿ 646 ಗ್ರಾಮೀಣ ಸಂತೆಗಳನ್ನು ಅಭಿವೃದ್ಧಿಪಡಿಸಿ ಗ್ರಾಮ ಪಂಚಾಯಿತ್ತಿಗಳಿಗೆ ಹಸ್ತಾಂತರಿಸಲಾಗಿದೆ.<br><br>ರೈತರು ತಾವು ಬೆಳೆದ ಉತ್ಪನ್ನಗಳನ್ನು ತಮ್ಮ ಫಾರಂ ಗೇಟ್ ಹತ್ತಿರದಲ್ಲಿಯೇ ನೇರವಾಗಿ ಮಾರಾಟ ಮಾಡಲು ಪರ್ಯಾಯ ಮಾರುಕಟ್ಟೆ ವ್ಯವಸ್ಥೆಗಳಾದ ನೇರ ಖರೀದಿ ಕೇಂದ್ರಗಳ ಸ್ಥಾಪನೆಗೆ ಅವಕಾಶ, ರೈತ-ಗ್ರಾಹಕ ಮಾರುಕಟ್ಟೆಗಳ ಸ್ಥಾಪನೆ, ಉಗ್ರಾಣ ಆಧಾರಿತ ಮಾರಾಟ ಚಟುವಟಿಕೆಗಳಿಗೆ ಕಾಯ್ದೆಯಡಿ ಅವಕಾಶ ಕಲ್ಪಿಸಲಾಗಿದೆ. ಅಧಿಸೂಚಿತ ಕೃಷಿ ಉತ್ಪನ್ನಗಳಲ್ಲಿ ವ್ಯವಹರಿಸಲು ಈವರೆಗೆ 62 ನೇರ ಖರೀದಿ ಕೇಂದ್ರಗಳ ಸ್ಥಾಪನೆಗಾಗಿ ಲೈಸೆನ್ಸ್ ಮಂಜೂರು ಮಾಡಿದ್ದು, ಕಾರ್ಯನಿರ್ವಹಿಸುತ್ತಿವೆ. ಇದರಿಂದಾಗಿ ಪ್ರಾಥಮಿಕ ಉತ್ಪಾದಕರಾದ ರೈತರಿಗೆ ತಮ್ಮ ಉತ್ಪನ್ನಗಳನ್ನು ಸಾಗಣೆ ಮಾಡಲು ಮತ್ತು ಸಾಗಾಣಿಕೆ ವೆಚ್ಚ ಕಡಿಮೆಗೊಳ್ಳಲು ಸಾಧ್ಯವಾಗುತ್ತದೆ. |
| ಆ. | ತೋಟಗಾರಿಕಾ ಬೆಳೆಗಳನ್ನು ಸಮರ್ಪಕವಾಗಿ ಹಾಗೂ ಸೂಕ್ತ ಬೆಲೆಗೆ ಮಾರಾಟ ಮಾಡಲು ಪೂರಕ ವ್ಯವಸ್ಥೆಗಳ ಕೊರತೆ ಹಿನ್ನಲೆಯಲ್ಲಿ ರೈತರು ಪರಿತಪಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯ; ಬಂದಿದ್ದಲ್ಲಿ ಸರ್ಕಾರದ ಕ್ರಮವೇನು; | ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರಡಿಯಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳನ್ನು ಸರ್ಕಾರವು ಸ್ಥಾಪಿಸಿ ರೈತರ ಹಿತಾಸಕ್ತಿ ಕಾಪಾಡುವ ನಿಟ್ಟಿನಲ್ಲಿ ಸದರಿ ಸಮಿತಿಗಳ ಆಡಳಿತವನ್ನು ರೈತ ಪ್ರತಿನಿಧಿಗಳ ಮೇಲ್ವಿಚಾರಣೆಯಲ್ಲಿ ನಡೆಸಲು ಅವಕಾಶಿಸಲಾಗಿದೆ. |

....2

| | | |
|---|---|---|
| | | ಮಾರುಕಟ್ಟೆ ಪ್ರಾಂಗಣಗಳಲ್ಲಿ ಅಧಿಸೂಚಿತ ಕೃಷಿ ಉತ್ಪನ್ನಗಳ ಸಗಟು ವಹಿವಾಟು ನಡೆಸಲು ಅವಕಾಶ ಕಲ್ಪಿಸಲಾಗಿದೆ. ಮಾರುಕಟ್ಟೆ ಸಮಿತಿಗಳು ಅಧಿಸೂಚಿತ ಕೃಷಿ ಉತ್ಪನ್ನಗಳ ದರಗಳನ್ನು ನಿಗಧಿಪಡಿಸುವುದಿಲ್ಲ. ಟೆಂಡರ್ ಪದ್ಧತಿ, ಬಹಿರಂಗ ಹರಾಜು, ಪರಸ್ಪರ ಒಪ್ಪಂದ ಮೂಲಕ ತಮ್ಮ ಉತ್ಪನ್ನಗಳನ್ನು ರೈತರು ಮಾರಾಟ ಮಾಡಲು ಕಾಯ್ದೆಯಲ್ಲಿ ಅವಕಾಶಿಸಿದೆ. |
| ಇ. | ಈ ತೋಟಗಾರಿಕಾ ಬೆಳೆಗಳನ್ನು ಮಾರಾಟ ಮಾಡಲು ನಗರ ವ್ಯಾಪ್ತಿಯಲ್ಲಿರುವ ಹಾಪ್‌ಕಾಮ್ಸ್ (ಎಪಿಎಂಸಿ) ವ್ಯಾಪಾರ ಮಳಿಗೆಗಳ ರೀತಿಯಲ್ಲಿ ರಾಜ್ಯದ ಜಿಲ್ಲಾ ಮತ್ತು ತಾಲ್ಲೂಕು ಹಂತದ ಪಟ್ಟಣಗಳಲ್ಲಿ ಸ್ಥಾಪಿಸಲು ಸರ್ಕಾರ ಚಿಂತನೆ ನಡೆಸಿದೆಯೇ;(ವಿವರ ನೀಡುವುದು) | ತೋಟಗಾರಿಕಾ ಬೆಳೆಗಳನ್ನು ಮಾರಾಟ ಮಾಡಲು ನಗರ ವ್ಯಾಪ್ತಿಯಲ್ಲಿರುವ ಹಾಪ್‌ಕಾಮ್ಸ್ ವ್ಯಾಪಾರ ಮಳಿಗೆಗಳ ರೀತಿಯಲ್ಲಿ ರಾಜ್ಯದ ಜಿಲ್ಲಾ ಮತ್ತು ತಾಲ್ಲೂಕು ಹಂತದ ಪಟ್ಟಣಗಳಲ್ಲಿ ಹಾಪ್‌ಕಾಮ್ಸ್ ಮಳಿಗೆಗಳನ್ನು ಸ್ಥಾಪಿಸಲಾಗಿದೆ. ವಿವರ ಅನುಬಂಧ-1ರಲ್ಲಿ ಒದಗಿಸಿದೆ. |
| ಈ | ತೋಟಗಾರಿಕಾ ಬೆಳೆಗಳನ್ನು ಮಾರಾಟ ಮಾಡಲು ಬರುವ ರೈತರು ದಲ್ಲಾಳಿಗಳಿಂದ ಶೋಷಣೆಗೊಳಪಟ್ಟಿರುವ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು? | ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರಡಿಯಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳನ್ನು ಸರ್ಕಾರವು ಸ್ಥಾಪಿಸಿ ರೈತರ ಹಿತಾಸಕ್ತಿ ಕಾಪಾಡುವ ನಿಟ್ಟಿನಲ್ಲಿ ಸದರಿ ಸಮಿತಿಗಳ ಆಡಳಿತವನ್ನು ರೈತ ಪ್ರತಿನಿಧಿಗಳ ಮೇಲ್ವಿಚಾರಣೆಯಲ್ಲಿ ನಡೆಸಲು ಅವಕಾಶಿಸಲಾಗಿದೆ. ರಾಜ್ಯದಲ್ಲಿ 92 ಅಧಿಸೂಚಿತ ಕೃಷಿ ಉತ್ಪನ್ನಗಳನ್ನು ಮಾರಾಟ ನಿಯಂತ್ರಣ ಕಕ್ಷೆಗೆ ಒಳಪಡಿಸಲಾಗಿದ್ದು, ಅವುಗಳಡಿ ತೋಟಗಾರಿಕಾ ಬೆಳೆಗಳು ಒಳಗೊಂಡಿದ್ದು, ಮಾರಾಟಕ್ಕಾಗಿ ಪ್ರಾಂಗಣಗಳಲ್ಲಿ ಮೂಲ ಭೂತ ಸೌಲಭ್ಯಗಳನ್ನು ಕಲ್ಪಿಸಲಾಗಿದೆ.<br><br>ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 75 ರನ್ವಯ ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡಿದ ದಿನವೇ ನಗದು ರೂಪದಲ್ಲಿ ಅಥವಾ ಚೆಕ್ ಮೂಲಕ ಹಣ ಪಾವತಿಸಬೇಕಿರುತ್ತದೆ ಎಂದು ನಿಬಂಧನೆ ಇರುತ್ತದೆ. ಕಲಂ 75(2) ರನ್ವಯ ರೈತ ಮಾರಾಟಗಾರರಿಗೆ ನಿಗಧಿತ ಅವಧಿಯಲ್ಲಿ ಹಣ ಸಂದಾಯವಾಗದಿದ್ದಲ್ಲಿ ಸದರಿ ಕಾಯ್ದೆಯ ಕಲಂ 3ರನ್ವಯ ಸಂಬಂಧಿಸಿದವರ ಲೈಸೆನ್ಸ್‌ನ್ನು ರದ್ದುಗೊಳಿಸಲು ಕಾಯ್ದೆಯಲ್ಲಿ ಅವಕಾಶಿಸಲಾಗಿದೆ. |

....3

 

| | | |
|---|---|---|
| | | ಕಾಯ್ದೆ ಕಲಂ 118-ಎ ರಡಿಯಲ್ಲಿ ಮಾರಾಟಗಾರನಿಗೆ ಬೆಲೆ ಸಂದಾಯ ಮಾಡಲು ವಿಫಲನಾದಲ್ಲಿ ಅಪರಾಧ ನಿರ್ಣಯವಾದ ಮೇಲೆ 6 ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರವಾಸ ಶಿಕ್ಷೆಯಿಂದ ಮತ್ತು ಸಂದಾಯ ಮಾಡಬೇಕಾದ ಬೆಲೆಯ ಮೊತ್ತದ ಎರಡು ಪಟ್ಟು ಜುಲ್ಮಾನೆಯಿಂದ ದಂಡಿತನಾಗಲು ಮತ್ತು ಮೊದಲನೇ ಅಪರಾಧ ನಿರ್ಣಯದ ತರುವಾಯ ಉಲ್ಲಂಘನೆ ಮುಂದುವರೆದಲ್ಲಿ ಆ ಉಲ್ಲಂಘನೆಯ ಕಾಲದಲ್ಲಿ ಒಂದು ದಿನಕ್ಕೆ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಹೆಚ್ಚಿನ ಜುಲ್ಮಾನೆಯಿಂದ ದಂಡಿತನಾಗಲು ಅವಕಾಶಿಸಲಾಗಿದೆ.<br><br>ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 78 ರಡಿ ಕಮೀಷನ್ ಏಜೆಂಟರ ಕಮೀಷನ್ ಮತ್ತು ಹೊಣೆಗಾರಿಕೆ ಹಾಗೂ ಜವಾಬ್ದಾರಿಗಳನ್ನು ನಿಗಧಿಪಡಿಸಲಾಗಿದೆ. ಕಮೀಷನ್ ಏಜೆಂಟರ ಸೇವೆಯನ್ನು ಬಳಸಿಕೊಂಡಲ್ಲಿ ಕಮೀಷನನ್ನು ಆಹಾರ ಧಾನ್ಯಗಳು, ಬೇಳೆ ಕಾಳುಗಳು, ಎಣ್ಣೆ ಬೀಜಗಳು, ಸಾಂಬಾರು ಪದಾರ್ಥಗಳು, ತೋಟಗಾರಿಕಾ ಬೆಳೆಗಳು ಮುಂತಾದ ಉತ್ಪನ್ನಗಳಿಗೆ ಶೇ.2 ರಷ್ಟು ಹಾಗೂ ಶೀಘ್ರ ಹಾಳಾಗುವ ಹಣ್ಣು ಮತ್ತು ತರಕಾರಿ ಉತ್ಪನ್ನಗಳಿಗೆ ಶೇ.5ಕ್ಕೆ ಮೀರದಂತೆ ಕಮೀಷನ್ ಪಾವತಿಸಲು ಕಾಯ್ದೆಯಲ್ಲಿ ನಿಗಧಿಪಡಿಸಲಾಗಿದೆ. ಯಾವುದೇ ಲೈಸೆನ್ಸ್ ಪಡೆದ ದಲಾಲರು ಈ ನಿಬಂಧನೆಗೆ ವಿರುದ್ಧವಾಗಿ ಹೆಚ್ಚಿನ ಕಮೀಷನ್ ಪಡೆಯಲು ಮುಂದಾದಲ್ಲಿ ರೈತರು ಅಥವಾ ವರ್ತಕರು ಮಾರುಕಟ್ಟೆ ಸಮಿತಿಗೆ ದೂರು ನೀಡಿದಲ್ಲಿ ಸಮಿತಿ ಈ ಬಗ್ಗೆ ಕಾನೂನು ಕ್ರಮ ವಹಿಸುತ್ತದೆ.<br><br>ರೈತರಿಗೆ ತಮ್ಮ ಉತ್ಪನ್ನಗಳ ಮಾರಾಟವಾದ ದಿನದಂದೇ ಮಾರಾಟದ ಬೆಲೆ ಪಾವತಿ, ಸಮಿತಿಯ ಉಪ ನಿಯಮಗಳಲ್ಲಿ ಅವಕಾಶಿಸಿರುವಂತೆ ಮಾರಾಟದ ನಂತರದಲ್ಲಿ ತಕ್ಕಪಟ್ಟಿ ನೀಡುವಿಕೆ ಮುಂತಾದ ಕ್ರಮಗಳು ಜಾರಿಯಾಗುತ್ತಿರುವ ಬಗ್ಗೆ ಮಾರುಕಟ್ಟೆ ಸಮಿತಿಗಳು ತಮ್ಮ ಹಂತದಲ್ಲಿ ಮೇಲ್ವಿಚಾರಣೆ ನಡೆಸುತ್ತಿದೆ. ಈ ಬಗ್ಗೆ ಮಾರುಕಟ್ಟೆ ಸಮಿತಿಗಳಿಗೆ ಕಟ್ಟುನಿಟ್ಟಿನ ಕ್ರಮ ವಹಿಸಲು ಸುತ್ತೋಲೆ ನಿರ್ದೇಶನಗಳನ್ನು ನೀಡಲಾಗಿದೆ.<br><br>ಕೆಲವು ದೂರುಗಳು ಸ್ವೀಕೃತವಾಗಿದ್ದು, ಪ್ರಸ್ತುತ ಅವುಗಳನ್ನು ಬಗೆಹರಿಸಲಾಗಿದೆ. |

**ಸಂಖ್ಯೆ:ಸಿಓ 606 ಎಂಆರ್ಇ 2020**

(ಎಸ್.ಟಿ.ಸೋಮಶೇಖರ್)
**ಸಹಕಾರ ಸಚಿವರು**

24

## ಅನುಬಂಧ - 1

### ರಾಜ್ಯದ ಜಿಲ್ಲಾ ಮತ್ತು ತಾಲ್ಲೂಕು ಹಂತದ ಪಟ್ಟಣಗಳ ಹಾಪ್ ಕಾಮ್ಸ್ ಮಳಿಗೆಗಳ ವಿವರ

| ಕ್ರಮ ಸಂ. | ಜಿಲ್ಲೆಗಳು | ಜಿಲ್ಲಾ ಮಟ್ಟದ ಮಳಿಗೆಗಳು (ಸಂ) | ತಾಲ್ಲೂಕು ಮಟ್ಟದ ಮಳಿಗೆಗಳು (ಸಂ) | ಒಟ್ಟು (ಸಂಖ್ಯೆಗಳಲ್ಲಿ) |
|---|---|---|---|---|
| 1. | ಬೆಂಗಳೂರು | 213 | 25 | 238 |
| 2. | ಬಾಗಲಕೋಟೆ | 2 | - | 2 |
| 3. | ಬೆಳಗಾವಿ | 8 | 1 | 9 |
| 4. | ಬಳ್ಳಾರಿ | 9 | 1 | 10 |
| 5. | ಬೀದರ್ | 1 | 1 | 2 |
| 6. | ಚಾಮರಾಜನಗರ | 4 | 3 | 7 |
| 7. | ಚಿತ್ರದುರ್ಗ | 12 | 7 | 19 |
| 8. | ದಾವಣಗೆರೆ | 4 | - | 4 |
| 9. | ಧಾರವಾಡ | 11 | 1 | 12 |
| 10. | ಗದಗ | 1 | 1 | 2 |
| 11. | ಹಾಸನ | 5 | 5 | 10 |
| 12. | ಕಲ್ಬುರ್ಗಿ | 5 | - | 5 |
| 13. | ಮಡಿಕೇರಿ | 1 | 2 | 3 |
| 14. | ಕೊಪ್ಪಳ | 2 | 1 | 3 |
| 15. | ಮಂಡ್ಯ | 14 | 9 | 23 |
| 16. | ದಕ್ಷಿಣ ಕನ್ನಡ | 10 | 2 | 12 |
| 17. | ಮೈಸೂರು | 40 | 4 | 44 |
| 18. | ರಾಯಚೂರು | 1 | 2 | 3 |
| 19. | ಶಿವಮೊಗ್ಗ | 20 | 2 | 22 |
| 20. | ಶಿರಸಿ | 5 | 8 | 13 |
| 21. | ತುಮಕೂರು | 6 | 4 | 10 |
| 22. | ವಿಜಯಪುರ | 11 | - | 11 |
| | ಒಟ್ಟು | 385 | 79 | 464 |

ವ್ಯವಸ್ಥಾಪಕ ನಿರ್ದೇಶಕರು
ಕೆ.ಹೆಚ್.ಎಫ್.